ಡಾ॥ ಎಸ್. ರಾಜಶೇಖರ

# ಹಂಪೆಯ ಕೃಷ್ಣದೇವರಾಯನ ಅಪೂರ್ವ ವಿಗ್ರಹ

ವಿಜಯನಗರದ ಅರಸ ಕೃಷ್ಣದೇವರಾಯನು ಕಳಿಂಗ ದಿಗ್ವಿಜಯ ಕೈಕೊಂಡಾಗ ಮೊದಲು ಮುತ್ತಿದುದು ಉದಯಗಿರಿ ರಾಜ್ಯದ ಮುಖ್ಯ ಪಟ್ಟಣವಾದ ಉದಯ ಗಿರಿಯನ್ನು. ಕ್ರಿ. ಶ. ೧೫೧೩ರಲ್ಲಿ ಉದಯಗಿರಿಕೋಟೆ ಯನ್ನು ಮುತ್ತಿದರೂ ಅದನ್ನು ತನ್ನ ವಶವಾಗಿರಿಸಿ ಕೊಂಡಿದ್ದು ಕ್ರಿ. ಶ. ೧೫೧೪ರಲ್ಲಿ. ಉದಯಗಿರಿಯನ್ನು ಜಯಿಸಿದ ನಂತರ ಕೃಷ್ಣದೇವರಾಯನು ಅರಸಿಯರಾದ ತಿರುಮಲಾದೇವಿ ಮತ್ತು ಚಿನ್ನಾದೇವಿಯರೊಂದಿಗೆ ತಿರುಪತಿ ಮತ್ತು ಶ್ರೀಶೈಲಗಳಿಗೆ ಹೋಗಿ ಅಲ್ಲಿ ಕ್ರಮವಾಗಿ ವೆಂಕಟೇಶ್ವರ ಮತ್ತು ಮಲ್ಲಿಕಾರ್ಜುನ ದೇವರನ್ನು ಪೂಜಿಸಿ, ದಾನಗಳನ್ನಿತ್ತು ರಾಜಧಾನಿ ವಿಜಯನಗರಕ್ಕೆ ಹಿಂದಿರುಗುವಾಗ ವಿಜಯದ ದ್ಯೋತಕವಾಗಿ ಉದಯ ಗಿರಿಯಿಂದ ಶ್ರೀ ಬಾಲಕೃಷ್ಣನ ಮೂರ್ತಿಯೊಂದನ್ನು ತನ್ನೊಂದಿಗೆ ತಂದನು.

ರಾಜಧಾನಿಯಲ್ಲಿ ಆ ವಿಗ್ರಹದ ಪ್ರತಿಷ್ಠಾಪನೆಗಾಗಿ ಹೊಸದಾಗಿ ದೇವಾಲಯವನ್ನು ನಿರ್ಮಿಸಿದನು. ಅದೇ ಬಾಲಕೃಷ್ಣ ದೇವಾಲಯ. ಇದನ್ನು ಕೃಷ್ಣಸ್ವಾಮಿ ದೇವಾಲಯವೆಂದೂ ಕರೆಯುತ್ತಾರೆ. ಬಾಲಕೃಷ್ಣನ ವಿಗ್ರಹವನ್ನು ಕ್ರಿ. ಶ. ೧೫೧೫ ಫೆಬ್ರವರಿ ತಿಂಗಳ ೧೬ನೇ ದಿನಾಂಕದಂದು ಪ್ರತಿಷ್ಠೆ ಮಾಡಲಾಯಿತು. ಈ ದೇವಾಲಯದಲ್ಲಿರುವ ಶಾಸನವೊಂದರಲ್ಲಿ "ಶ್ರೀಮನ್ಮಹಾ ರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ಶ್ರೀವೀರ ಕೃಷ್ಣರಾಯರು ಉದಯಗಿರಿಯಿಂದ ಬಿಜೆಮಾಡಿಸಿ ಕೊಂಡು ಬಂದ ಶ್ರೀಬಾಲಕೃಷ್ಣದೇವರ ಪ್ರತಿಷ್ಠೆಯ ಮಾಡಿ, ಆ ಪ್ರತಿಷ್ಠೆ ಕಾಲದಲ್ಲಿ ಕೃಷ್ಣದೇವರಿಗೆ ನವರತ್ನ ಖಚಿತ ನಾನಾ ವಿಧ ಆಭರಣಗಳನ್ನು ಸುವರ್ಣರಜತಾ ದ್ಯುಪಕರಣಗಳನೂ" ಸಮರ್ಪಿಸಿದನೆಂದು ವರ್ಣಿಸ ಲಾಗಿದೆ.[1]

ಬಾಲಕೃಷ್ಣ ದೇವಾಲಯವು ಗರ್ಭಗೃಹ, ಪ್ರದಕ್ಷಣಾ ಪಥ, ಸುಕನಾಸಿ, ಅರ್ಧಮಂಟಪ, ನವರಂಗ, ಮುಖ ಮಂಟಪಗಳನ್ನೂ ಪರಿವಾರ ದೇವತೆಗಳಿಗಾಗಿ ಚಿಕ್ಕ ದೇವಾಲಯಗಳನ್ನೂ ಹೊಂದಿದೆ. ಮುಖಮಂಟಪದ ಕಂಬಗಳ ಮೇಲೆ ಅನೇಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳು ಹೆಚ್ಚಾಗಿ ವೈಷ್ಣವ ಸಂಪ್ರದಾಯಕ್ಕೆ ಸೇರಿದವುಗಳಾಗಿವೆ. ಮುಖಮಂಟಪದ ಮುಂದಿನ ಸಾಲಿನ (ಗರ್ಭಗೃಹಕ್ಕೆ ಎದುರಾಗಿ ಇರುವ) ಕಂಬವೊಂದರಲ್ಲಿ ಪಶ್ಚಿಮದ ಕಡೆಗೆ ಇರುವ ಉಬ್ಬುಶಿಲ್ಪ ವೊಂದು ವಿಶಿಷ್ಟವಾದುದಾಗಿದೆ. ಈ ಶಿಲ್ಪದಲ್ಲಿ ಕೃಷ್ಣ ದೇವರಾಯನು ತ್ರಿಭಂಗಿಯಲ್ಲಿ ನಿಂತಿದ್ದು, ಇವನು ಬಾಲಕೃಷ್ಣನ ಪ್ರತಿಮೆಯ ಮುಂದೆ ಅಂಜಲಿಹಸ್ತದಲ್ಲಿ ಇದ್ದಾನೆ. ಬಾಲಕೃಷ್ಣನನ್ನು ಪೀಠವೊಂದರ ಮೇಲೆ ಮಂಡಿ ಊರಿ ನಡೆಯುತ್ತಿರುವ ಭಂಗಿಯಲ್ಲಿ ತೋರಿಸ ಲಾಗಿದೆ. ಬಲಗೈಯಲ್ಲಿ ಬೆಣ್ಣೆಯ ಮುದ್ದೆಯನ್ನೂ ಹಿಡಿದಿದ್ದಾನೆ. ಕೃಷ್ಣದೇವರಾಯನು ಧೋತಿಯನ್ನು

1. South Indian Inscriptions, Vol. 4, No. 254

ಉಟ್ಟಿದ್ದು ತೆರೆದ ಕೋಟಿನಂತಹ ಮೇಲಂಗಿಯನ್ನು ಧರಿಸಿದ್ದಾನೆ. ತಲೆಯ ಮೇಲೆ ಧರಿಸಿದ ಟೋಪಿ ಎತ್ತರವಾಗಿರದೆ ಗಿಡ್ಡಾಗಿದ್ದು, ಚಿದಂಬರಂದಲ್ಲಿಯ ನಟರಾಜ ದೇವಸ್ಥಾನದಲ್ಲಿಯ ಕೃಷ್ಣದೇವರಾಯನ ಶಿಲ್ಪದಲ್ಲಿದ್ದಂತೆ ಇದೆ.

ಗರ್ಭಗುಡಿಯಲ್ಲಿ ಪ್ರತಿಷ್ಠೆ ಮಾಡಲಾಗಿದ್ದ ಬಾಲ ಕೃಷ್ಣನ ವಿಗ್ರಹವು ಪ್ರಸ್ತುತ ಮದ್ರಾಸದಲ್ಲಿಯ ಸರಕಾರದ ವಸ್ತುಸಂಗ್ರಹಾಲಯದಲ್ಲಿದೆ.[2] ಈ ಮೂರ್ತಿಯಲ್ಲಿ ಬಾಲಕೃಷ್ಣನು ಮಂಡಿ ಊರಿ ನಡೆಯುತ್ತಿರುವ ಭಂಗಿಯಲ್ಲಿ ಇರದೆ ಪೀಠದ ಮೇಲೆ ಕುಳಿತ ಭಂಗಿಯಲ್ಲಿರುವದು ಗಮನಾರ್ಹ. ಕೃಷ್ಣದೇವರಾಯನು ಉದಯಗಿರಿಯಿಂದ ವಿಜಯನಗರಕ್ಕೆ ಬಿಜಯ ಮಾಡಿಸಿದ ಬಾಲಕೃಷ್ಣನಿಗೆ ದೇವಾಲಯವನ್ನು ಕಟ್ಟಿದುದಲ್ಲದೆ, ತನ್ನ ಭಕ್ತಿಯನ್ನು ಮೇಲೆ ವರ್ಣಿಸಲಾದ ಶಿಲ್ಪವೊಂದರಲ್ಲಿ ಅಜರಾಮರವಾಗಿ ಉಳಿಯುವಂತೆ ಮಾಡಿದ್ದಾನೆ. ಕೃಷ್ಣದೇವರಾಯನ ಅನೇಕ ಶಿಲ್ಪಗಳು ದೊರೆತಿದ್ದರೂ ಈ ರೀತಿ ದೇವರನ್ನು ಪೂಜಿಸುತ್ತಿರುವ ಶಿಲ್ಪವು ಬೇರೆಲ್ಲೂ ಕಂಡು ಬಂದಿಲ್ಲ.

---

2. C. Shivarama Murthy : 'Balakrishna From Hampi in the Madras Museum', Journal of Oriental Research, Madras, Vol. 10, 1936, pp. 275-76